# ಕಾನನ

## ನಿಸರ್ಗದೆಡೆಗೆ ಪಯಣ

ಮುಖಪುಟ

ನೈದಿಲೆ ಮತ್ತು ಜೇನೂಣ



ಮೇ 2020




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಹಯಾತ್ ಮೊಹಮ್ಮದ್

**ಪರಿಷ್ಕರಣೆ**

ಮುರಳಿ ಎಸ್.

ಅನನ್ಯರೂಪ

**ಕರಡು ತಿದ್ದುಪಡಿ**

ಡಾ.ದೀಪಕ್ ಬಿ., ಮೈಸೂರು




# ಅಳಲೆಕಾಯಿ

**ಸಾಮಾನ್ಯ ಹೆಸರು :** Black myrobalan

**ವೈಜ್ಞಾನಿಕ ಹೆಸರು:** *Terminalia chebula*



© ನಾಗೇಶ್ ಓ. ಎಸ್. ಅಳಲೆಕಾಯಿ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ದಕ್ಷಿಣ ಏಷ್ಯಾ ಖಂಡದ ಕೆಲವು ದೇಶಗಳ ಶುಷ್ಕ ಕಾಡಿನಲ್ಲಿ ಕಂಡುಬರುವ ಅಳಲೆಮರ ಸುಮಾರು ಇಪ್ಪತ್ತೈದರಿಂದ ಮೂವತ್ತು ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಕಾಂಡವು ಕಡು ಬೂದು ಬಣ್ಣದ ತೊಗಟೆಯನ್ನು ಹೊಂದಿದ್ದು ಸುಮಾರು ಒಂದು ಮೀಟರ್ ಸುತ್ತಳತೆಯನ್ನ ಹೊಂದಿರುತ್ತದೆ. ಎಲೆಗಳು ತೊಟ್ಟಿನಲ್ಲಿ ಒಂದಕ್ಕೊಂದು ಅಭಿಮುಖವಾಗಿ ಜೋಡಿಸಲ್ಪಟ್ಟಿರುತ್ತದೆ. ತಿಳಿಬಿಳಿ ಮಿಶ್ರಿತ ಹಸಿರು ಬಣ್ಣದ ಹೂಗಳನ್ನು ಬಿಡುವ ಈ ಮರದಲ್ಲಿ ಗಂಡು ಮತ್ತು ಹೆಣ್ಣು ಹೂ ಪ್ರತ್ಯೇಕವಾಗಿರುತ್ತವೆ. ಹಸಿರುಬಣ್ಣದ ಮೊಟ್ಟೆಯಾಕಾರದ ಸಣ್ಣ ಸಣ್ಣ ಕಾಯಿಗಳನ್ನು ಬಿಡುತ್ತವೆ. ಈ ಕಾಯಿಗಳು ಒಣಗಿದಾಗ ತಿಳಿ ಹಳದಿ ಬಣ್ಣಕ್ಕೆತಿರುಗಿ ಗಟ್ಟಿಯಾಗತ್ತದೆ. ಸಾಮಾನ್ಯವಾಗಿ ಏಪ್ರಿಲ್ ತಿಂಗಳಲ್ಲಿ ಕಾಯಿಗಳನ್ನ ಕಾಣಬಹುದು.

ಈ ಅಳಲೇ ಕಾಯಿಯು ಆಯುರ್ವೇದದಲ್ಲಿ "ಔಷಧಿಗಳ ರಾಜ" ಎಂದೇ ಕರೆಯಲ್ಪಟ್ಟಿದೆ. ಆಯುರ್ವೇದದ ಪ್ರಸಿದ್ಧ ತ್ರಿಫಲ ಚೂರ್ಣದಲ್ಲಿ ಈ ಅಳಲೇ ಕಾಯಿಯನ್ನು ಉಪಯೋಗಿಸುತ್ತಾರೆ.




# ಹಸಿರು ಹಾದಿಯಲಿ...
# ಕಾಡಂಚಿನ ಅನುಭವ ಕಥನ

ಮುಂಜಾನೆ ಚಿಕ್ಕಬಳ್ಳಾಪುರಕ್ಕೆ ಬಸ್ ಹಿಡಿದು ಹೊರಟೆ. ಈ ಹಿಂದಿನ ದಿನಗಳಲ್ಲಿ ಶಿರಸಿ ಭಾಗದ ಅರಣ್ಯ ಪ್ರದೇಶಕ್ಕೆ ಹೋಗಬೇಕೆಂದು ದಿನಾಂಕ ನಿಗದಿ ಮಾಡಿ. ಬೇರೆ ಬೇರೆ ಕಾರಣದಿಂದ ರದ್ದಾಗುತ್ತಿದ್ದವು. ಕೊನೆಗೂ ಪ್ರಯತ್ನ ಮಾಡಿ  ಕಾತೂರ್ ಅರಣ್ಯ ವಲಯ ಅರಣ್ಯಾಧಿಕಾರಿಯಾದ ವಿರೇಶ್ ರವರಿಗೆ ಕರೆ ಮಾಡಿ ಜನವರಿ 25 ಮತ್ತು 26 ರಂದು ನಿಗದಿ ಮಾಡಿಯೇ ಬಿಟ್ಟೆ. ಈಗ ಹೋಗುವುದು ಖಚಿತವಾಗಿತ್ತು. ನಾನೊಬ್ಬನೇನಾ? ಎಂಬ ಪ್ರಶ್ನೆ ಮಾಡಿತು. ಅಷ್ಟರಲ್ಲಿ ಪರಿಸರಾಸಕ್ತರಾದ ಜಲಜ, ಹರೀಶ್, ಮಂಜು ಆಲದಮರ, ವಿನಯ್, ಅಶ್ವಥ್ ಸರ್ ಕೂಡ ಬರುವುದಾಗಿ ನನಗೆ ಮಾಹಿತಿ ನೀಡಿದರು. ಜೊತೆಯಾಗಿ ಎಲ್ಲರೂ ಅಲೆಮಾರಿಗಳಾಗಿ ತಿರುಗಬಹುದೆಂದು ಸ್ವಲ್ಪ ಸಂತಸವಾಯಿತು.. ಅಂದಿನಿಂದ ಪ್ರತಿದಿನ ನಾವು ಏನು ಮಾಡಿದರೆ ಕಡಿಮೆ ಹಣದಲ್ಲಿ ಮತ್ತು ಕಡಿಮೆ ಸಮಯದಲ್ಲಿ ಹೋಗಬಹುದೆಂದು   ಲೆಕ್ಕ   ಹಾಕುತ್ತಿದ್ದೆ...

ಬೆಂಗಳೂರಿನ ನಮ್ಮ ಸ್ನೇಹಿತರಾದ ಡಾ. ಲೋಕೇಶ್ ಜೀವಾಂಕುರ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಭೇಟಿಯಾದರು. ಪ್ರವಾಸದ ಯೋಜನೆಯ ಬಗ್ಗೆ ಚರ್ಚಿಸಿದೆವು. ಹೀಗೆ ಮಾತನಾಡುತ್ತಾ ಮಾತನಾಡುತ್ತಾ ನಮ್ಮ ಮಾತು ಗಿಡ ನೆಡುವ ಕಡೆ ವಾಲಿತು. ಸರ್ ನಮ್ಮೂರಿನ (ಚಳ್ಳಕೆರೆಯ ಹಳ್ಳಿಯೊಂದು) ಜನರಿಗೆ ಪರಿಸರದ ಬಗ್ಗೆ ಕಾಳಜಿನೇ ಇಲ್ಲ, ನಮ್ಮೂರಿನ ದೇವಸ್ಥಾನದ ಹತ್ತಿರ ಗಿಡಗಳನ್ನು ಹಾಕಲು ಹೋದೆ, ಅಲ್ಲಿನವರು ಹೇಳಿದ್ರು, ನೀನೇನ್ ಗಿಡ ಹಾಕ್ಬಿಟ್ಟು ಹೋಗ್ಬಿಡ್ತಿಯಾ, ನೀರ್ ಯಾರ್ ಹಾಕ್ತಾರೆ? ಅಂತಾರೆ. ನನಗೆ ಅವರ ಈ ಮಾತು ಕೇಳಿ

ಬೇಸರವಾಯಿತು. ನಾನೇ ಪ್ರತಿವಾರ ಬೆಂಗಳೂರಿಂದ ಬಂದು ನೀರನ್ನು ಹಾಕುತ್ತೇನೆಂದರೂ ಅವರು ಗಿಡ ನೆಡಲು ಬಿಡಲಿಲ್ಲ ಎಂದು ಬೇಸರ ವ್ಯಕ್ತಪಡಿಸಿದರು. ಅಷ್ಟರಲ್ಲಾಗಲೇ ಸೂರ್ಯನು ತನ್ನ ನಾಳೆಯ ದಿನಗಳಿಗೆ ತಯಾರಾಗುವಂತೆ ಸಾಗುತ್ತಿದ್ದ.. ಬಸ್ ನಿಲ್ದಾಣಕ್ಕೆ ಬಂದರೂ ನಮ್ಮ ಮಾತುಗಳು ಮುಗಿಯಲಿಲ್ಲ... ಕೊನೆಗೆ ನಾನು ಊರಿಗೆ ಬರಬೇಕಾದ್ದರಿಂದ ಮತ್ತೆ ಪ್ರವಾಸಕ್ಕೆ ಹೋಗುವ ದಿನ ಸಿಗೋಣ ಅಂತೇಳಿ ಹೊರಟೆ. ಅವರು ಮೆಟ್ರೋ ಕಡೆ ಹೊರಟರು.

ಪ್ರವಾಸದ ದಿನ ಹತ್ತಿರಾಗುತ್ತಿರಲು ಸಮಯವಿರದ ಕೆಲ ಗೆಳೆಯರು ಮತ್ತೊಮ್ಮೆ ಹೋಗೋಣವೇ? ಎಂದರು, ರೈಲ್ವೆ ಟಿಕೇಟು ಸಿಗಲಿಲ್ಲ. ತತ್ಕಾಲ್ ಟಿಕೇಟು ದುಬಾರಿ ಆಯಿತು. ಹೀಗೆ ಎಲ್ಲ ತೊಂದರೆಗಳನ್ನು ಮೀರಿ, ನಾವು ಹೊರಟ ಟ್ರೈನ್ ಶನಿವಾರ ಬೆಳಿಗ್ಗೆ ಐದೂ ಮೂವತ್ತಕ್ಕೆ ತಲುಪಬೇಕಿದ್ದದ್ದು ಆರೂವರೆಗೆ ಹುಬ್ಬಳ್ಳಿ ತಲುಪಿತು. ಅಲ್ಲಿಂದ ಇಳಿದು, ಆಟೋರಿಕ್ಷಾ ಹತ್ತಿ ಹುಬ್ಬಳ್ಳಿಯ ಹಳೇ ಬಸ್ ನಿಲ್ದಾಣಕ್ಕೆ ಬಂದಿಳಿದೆವು. ಅಷ್ಟರಲ್ಲಾಗಲೇ ವೀರೇಶ್ ಸರ್ ಕರೆ ಮಾಡಿ ಮುಂಡುಗೋಡು ಬಸ್ ಹತ್ತಿ ವಡಗಟ್ಟ ಚೆಕ್ ಪೋಸ್ಟ್ ಹತ್ತಿರ ಇಳಿಯುವಂತೆ ಸೂಚಿಸಿದರು. ಬಸ್ ನಿಲ್ದಾಣದಿಂದ ಹೊರ ಬರುತ್ತಿದ್ದ ಬಸ್ ನೋಡಿದೆ. ಮುಂಡಗೋಡು ಅಂತ ಬೋರ್ಡ್ ಹಾಕಿದ್ರು. ಆದರೂ ಇಳಿಯುವ ಸ್ಥಳ ಕೇಳಿ ಬಸ್ ಹತ್ತಿದ್ವಿ. ಒಂದು ತಾಸು ಪ್ರಯಾಣದೊಳಗೆ ವಡಗಟ್ಟ ಚೆಕ್ ಪೋಸ್ಟ್ ಹತ್ತಿರ ನಮ್ಮನ್ನು ಧುಮುಕಿಸಿದರು.


© ಮಂಜುನಾಥ್ ಅಮಲಗೊಂದಿ

ಸ್ವಲ್ಪ ಸಮಯದಲ್ಲಿ ನಾವಿದ್ದಲ್ಲಿಗೇ ಒಬ್ಬ ವ್ಯಕ್ತಿ ಬೈಕ್ ನಲ್ಲಿ ಬಂದು ತಲೆಗೆ ಹಾಕಿದ್ದ ಹೆಲ್ಮೆಟ್ ತೆಗೆದರು. ನೋಡಿದರೆ ಅವರು ನಮ್ಮ ಪಕ್ಷಿ ತಜ್ಞ ಮಹೇಶಣ್ಣ. ಹಣೆಮೇಲೆ ವಿಭೂತಿ ಪಟ್ಟೆ ಹೊಡೆದಿದ್ದರು. ಹೆಲ್ಮೆಟ್ ಹಾಕಿಕೊಂಡು ಬಂದಿದ್ದರಿಂದ ಅವರ ಹಣೆ ಹಳೆಯ ಶಾಸನಗಳ ರೀತಿ ಅಚ್ಚೊಡೆದಿತ್ತು. ಹಿಂದಿನ ವರ್ಷ ನೋಡಿದ್ದು ಇವರನ್ನು. ಬಹಳ ಸಂತೋಷವಾಗಿ ಮುಗುಳ್ನಕ್ಕು ಕೈಕುಲುಕಿದೆವು. ಮಹೇಶ್ ರವರು ತಾವು ತಂದಿದ್ದ ಬೈನಾಕ್ಯುಲಾರ್ ಹೊರತೆಗೆದು ಪಕ್ಕದಲ್ಲಿದ್ದ ಕೊಳದ ಕಡೆ ಕೈ ತೋರುತ್ತಾ, ನೋಡಿ Spot billed duck (ಚುಕ್ಕೆ ಕೊಕ್ಕಿನ ಬಾತು) ಎಂದು ತೋರಿಸಿದರು. ಆಗಲೇ intermediate egret (ಬೆಳ್ಳಕ್ಕಿ) ಮತ್ತು ಬಾಯ್ಕಳಕ ಕೊಕ್ಕರೆ ಹಾರಿ ಬಂದವು. ಅವುಗಳ ಚಲನವಲನಗಳನ್ನು ಕಣ್ತುಂಬಿಕೊಂಡೆವು. ನೋಡ ನೋಡುತ್ತಿದ್ದಂತೆ ಪೊದೆಯಿಂದ ಹಂದಿಗಳ ಸಾಲು, ಅವುಗಳ ಹಿಂದೆ ಅವುಗಳ ಮರಿಗಳ ಸಾಲು ಹೊರಬಂದವು... ನಾವು ಹಿಂದೆಂದೂ ಅಷ್ಟು ಹಂದಿಗಳನ್ನು ಒಂದೇ ಕಡೆ ಇಷ್ಟು ಹತ್ತಿರದಿಂದ ನೋಡಿರಲಿಲ್ಲ. ಬೈನಾಕ್ಯುಲರ್ ನ ಬೆಲ್ಟನ್ನು ಕೊರಳಿಗೆ ಹಾಕಿಕೊಂಡು ಹಂದಿಗಳ ರಂಪಾಟವನ್ನು

ನೋಡಿ ಮೊದಲ ಪ್ರಾಣಿ ದರ್ಶನವನ್ನೂ ಮಾಡಿದ್ದಾಯಿತು. ಅಷ್ಟರೊಳಗೆ ವೀರೇಶ್ ಸರ್ ಕೂಡಾ ಬೈಕ್ ನಲ್ಲಿ ಬಂದು ನಮ್ಮೊಂದಿಗೆ ಜೊತೆಯಾದರು. ಅವರಿಗೂ ಸಹ ಹಂದಿಗಳ ದರ್ಶನವನ್ನು ಮಾಡಿಸಿದೆವು. ತಕ್ಷಣವೇ ಮಹೇಶಣ್ಣ ಒಂದು ಪಕ್ಷಿ ಶಬ್ದ ಕೇಳಿ ನಮ್ ಕಡೆ ಕೈ ಬೀಸಿ, ಬನ್ನಿ ಬನ್ನಿ ಇಲ್ಲಿ ಎನ್ನುತ್ತ ನಮ್ಮ ಪಕ್ಕದಲ್ಲೇ ಇದ್ದ ಮರದಲ್ಲಿ Racket tailed drongo (ಭೀಮರಾಜ) ಪಕ್ಷಿಯನ್ನು ತೋರಿಸಿದರು. ಅದನ್ನು ಬಹು ಕುತೂಹಲದಿಂದ ಬೈನಾಕ್ಯುಲರ್ ನಿಂದ ಕಣ್ಣಿಗೆ ಮುತ್ತಿಕ್ಕುವಂತೆ ಅಪ್ಪಿಕೊಂಡು ನೋಡಲು ಪ್ರಾರಂಭಿಸಿದೆವು. ಅಷ್ಟರಲ್ಲಿ ಅದೇ ಮರದಲ್ಲಿ ಕೆಂದಳಿಲು ಮರದಿಂದ ಮರಕ್ಕೆ ಜಿಗಿಯುತ್ತಿತ್ತು. ಅದು ಮರದಿಂದ ಮರಕ್ಕೆ ಮಾಡುತ್ತಿದ್ದ ಜಂಪಿಂಗ್ ನಿಂದಾಗಿ ಹೆಚ್ಚು ಹೊತ್ತು ನೋಡಲಾಗಲಿಲ್ಲ. ಇನ್ನೂ ಸ್ವಲ್ಪ ಅದರ ಜಂಪಿಂಗ್ ನೋಡಲು ಆಸೆ ಇದ್ದರೂ ಅದು ಬೇಗ ಮರೆಯಾಗಿ ಹೋಗಿತ್ತು. ಅಷ್ಟರಲ್ಲಿ ವೀರೇಶ್ ಸ್ನೇಹಿತರಾದ ರುಸ್ತುಮ್ ರವರು ಬೈಕ್ ನಲ್ಲಿ ಬಂದರು. ಎಲ್ಲರನ್ನೂ ಎಲ್ಲರೂ ಪರಸ್ಪರ ಪರಿಚಯ ಮಾಡಿಕೊಂಡು, ಬೈಕ್ ಹತ್ತಿಕೊಂಡು ಅತ್ತಿವೇರಿ ಪಕ್ಷಿಧಾಮದ ಕಡೆ ಪಯಣ ಮುಂದುವರೆಸಲಾಯಿತು.




ಹೋಗುವ ದಾರಿಯಲ್ಲಿ ಕೆಂಡದಂತೆ ಹೊಳೆಯುವ ಮುತ್ತುಗ ಮರದ ಹೂ ನಮ್ಮನ್ನು ಆತ್ಮೀಯವಾಗಿ ಸ್ವಾಗತಿಸಿದಂತೆ ಭಾಸವಾಗುತ್ತಿತ್ತು. ದಾರಿ ಪಕ್ಕದ ಕುರುಚಲು ಕಾಡಿನಲ್ಲಿ ದಾರಿ ತಪ್ಪಿದಂತೆ ನರಿ ಹೋಗುತ್ತಿದ್ದುದು ಮಂಜು ಅಮಲಗುಂದ, ಮಹೇಶ್ ರವರ ಕಣ್ಣಿಗೆಬಿತ್ತು. ನವಿಲು ಸಹ ರೆಕ್ಕೆ ಬಿಚ್ಚಿದ್ದನ್ನು ನೋಡಿ ನಾವು ಖುಷಿಪಟ್ಟೆವು ಎಂದು ಸಂತಸ ವ್ಯಕ್ತಪಡಿಸಿದರು. ಅದೇ ದಾರಿಯಲ್ಲಿ ಹೋಗುವಾಗ Brahminy Starling, Plum Headed Parakeet (ಕೆಂದಲೆ ಗಿಳಿ), ಮೈನಾ, ಕಾಜಾಣ ಪಕ್ಷಿಗಳನ್ನು ನೋಡುತ್ತಾ ಮುಂದೆ ಸಾಗಿದೆವು. ಕೆಲವೇ ನಿಮಿಷಗಳಲ್ಲಿ ಅತ್ತಿವೇರಿ ಪಕ್ಷಿಧಾಮವನ್ನ ತಲುಪಿದೆವು. ಪಕ್ಷಿಧಾಮದಲ್ಲಿ ನಮಗೆ ತಿಂಡಿ ಮಾಡುವಂತೆ ವಿರೇಶ್ ಸರ್ ರವರು ಹೇಳಿದರು. ನಮ್ಮೆಲ್ಲಾ ಬ್ಯಾಗುಗಳನ್ನು ಅಲ್ಲೇ ಇಟ್ಟು, ಪಕ್ಷಿ ವೀಕ್ಷಣೆಗೆ ಕೆರೆಯ ಏರಿಯ ಮೇಲೆ ನಡೆಯುತ್ತಾ ಮಹೇಶ್ ಸರ್ ಮಾರ್ಗದರ್ಶನದಲ್ಲಿ ಸಾಗುತ್ತಿದ್ದೆವು.

ಮಹೇಶ್ ರವರನ್ನು ಪಕ್ಷಿಪ್ರಪಂಚದ ಬ್ರಹ್ಮಾಂಡವೆಂದೇ ಹೇಳಬಹುದು. ಒಂದು ಪಕ್ಷಿ ನೋಡಿದೊಡನೆ ಅದರ ಇತಿಹಾಸ, ಗುಣಲಕ್ಷಣಗಳ, ದಿನನಿತ್ಯದ ಚಟುವಟಿಕೆಗಳಬಗ್ಗೆ ಕೂಲಂಕುಶವಾಗಿ ಹೇಳತೊಡಗುತ್ತಿದ್ದರು. ಬೂದು ಕಾಜಾಣ, ಮಧುರಕಂಠ, ಕೆಮ್ಮೀಸೆ ಪೀಕಳಾರ, Collored Dove, River Turn (ನದಿ ರೀವ), ಜೊಂಡು ಉಲಿಯಕ್ಕಿ, ಕವಲು ತೋಕೆ, ಸಣ್ಣ ಕಳ್ಳಿಪೀರ, ಸ್ವರ್ಗದ ಪಕ್ಷಿ ನೋಡುತ್ತಾ ಮುಂದೆ ಕೆರೆಯ ಮೇಲೆ ಹೆಜ್ಜೆ ಹಾಕುತ್ತಿದ್ದೆವು. ಕೆರೆಯ ಮಧ್ಯದಲ್ಲಿ ಜಾಲಿಗಿಡದ ಮೇಲೆ ಹೊನ್ನಕ್ಕಿ, ನೀರು ಕಾಗೆ, Spoon Bills ಗಳು ನೀರಲ್ಲಿ ಮುಳುಗಿ ಬಂದು ರೆಕ್ಕೆ

ಬಿಚ್ಚಿಕೊಂಡು ಟೊಂಗೆಯ ಮೇಲೆ ಕುಳಿತಿದ್ದವು. ವಿನಯ್ ಕೆಲ ಪಕ್ಷಿಗಳನ್ನು ಗುರುತಿಸುತ್ತಿದ್ದರು. ನಾನು ಮತ್ತು ಮಂಜು, ಗುರುತಿಸಲು ಪ್ರಯತ್ನ ಮಾಡುತ್ತಿದ್ದೆವು. ಹಾಗೆಯೇ ಪಕ್ಷಿಗಳನ್ನು ವೀಕ್ಷಿಸುತ್ತಾ ಮುಂದೆ ಸಾಗಿದೆವು. ಕೆಲ ಸಮಯದ ನಂತರ ವಾಪಸ್ ಬಂದು ಟೀ ಕುಡಿದು ಕೆರೆಯೊಳಗಿನ ಕಬ್ಬಿಣದ ಸೇತುವೆಯ ಕಡೆ ನಡೆದೆವು.

ಉದ್ಯಾನವನದ ಸಿಮೆಂಟ್ ದಾರಿಯಲ್ಲಿ ಸಾಗುತ್ತಿದ್ದಾಗ ಸ್ವರ್ಗದ ಪಕ್ಷಿ ಮಹೇಶಣ್ಣನ ಕಣ್ಣಿಗೆ ಬಿತ್ತು, ನೀವೆಲ್ಲಾ ಇಂದು ತುಂಬಾ ಅದೃಷ್ಟ ಮಾಡಿದ್ದೀರಾ ಎಂದು, ಆ ಪಕ್ಷಿಯನ್ನು ತೋರಿಸಿದರು. ಅದರ ಬಾಲವು ಉದ್ದದ ಎರಡು ರೆಕ್ಕೆಯಿಂದ ಕೂಡಿದ್ದು, ಈ ಬಾಲದ ರೆಕ್ಕೆಗಳಿಗೆ ತಲೆಯ ಪೇಟಕ್ಕಿಡಲು ಬಹಳ ಬೇಡಿಕೆಯಿದೆ, ಆ ಬಾಲ ಇರುವುದು ಗಂಡು ಹಕ್ಕಿಯಾಗಿರುತ್ತದೆ. ಅದು ಪ್ರಾಯಕ್ಕೆ ಬರುವಾಗ ಬಂಗಾರದ ಬಣ್ಣದಿಂದ ಬಿಳಿ ಬಣ್ಣಕ್ಕೆ ತಿರುಗುತ್ತದೆ, ಆಗ ಗಂಡು-ಹೆಣ್ಣು ಎರಡೂ ಪಕ್ಷಿಗಳು ಸೇರಿ ಸಂಸಾರ ಮಾಡಿ ಮೊಟ್ಟೆ ಇಟ್ಟು ಮರಿ ಮಾಡುತ್ತವೆ ಎಂಬ ಮಾಹಿತಿಯನ್ನು ಹೇಳುತ್ತಿರುವಾಗಲೇ, ಮಂಜು ಅಮಲಗುಂದ ಮಾತಿನ ಬಾಣವನ್ನು ಮಹೇಶ್ ರವರ ಕಡೆ ಬಿಡುತ್ತಾ, "ಸರ್ ಪಕ್ಷಿಗಳಲ್ಲಿ ಇಂಟರ್ ಕ್ಯಾಸ್ಟ್ ಮದುವೆ ಇದೆಯಾ" ಎಂದು ಕೇಳಿದ. ಇವರ ಪ್ರಶ್ನೆಗೆ ಪ್ರತಿಕ್ರಿಯೆ ನೀಡುತ್ತಾ ತಲೆ ಅಲ್ಲಾಡಿಸುತ್ತಾ ಹಾಗೆಲ್ಲಾ ಇಲ್ಲವೆಂದರು. ಹೀಗೆ ಹಾಸ್ಯಮಯ ಪ್ರಶ್ನೆಗಳಿಗೆ ನಗುತ್ತಾ ಕೆರೆಯ ಮಧ್ಯೆ ಇರುವ ಸೇತುವೆ ಕಡೆ ನಡೆದೆವು. ಅಲ್ಲಿ ಹೊನ್ನಕ್ಕಿ ತನ್ನ ಬಾಲದಲ್ಲಿ ಎರಡು ತಂತಿಗಳನ್ನು ಸಿಕ್ಕಿಸಿಕೊಂಡಂತೆ ಕಾಣಿಸಿತು. ಅದರ ಬಗ್ಗೆ ತಿಳಿದುಕೊಳ್ಳುತ್ತಾ, ಅವು ಆ ಸೇತುವೆಯ ಕೆಳಗೆ ಮಣ್ಣಿನಿಂದ ಗೂಡುಕಟ್ಟಿ ವಾಸ ಮಾಡುತ್ತಿರುತ್ತವೆ. ತಕ್ಷಣವೇ ವಿನಯ್ ಮಹೇಶ್ ರವರನ್ನು ಕೇಳುತ್ತಾ "ಪಕ್ಷಿಗಳು ವಲಸೆ ಬರುವಾಗ ಅದೇ ಜಾಗಕ್ಕೆ ಹೇಗೆ ಮುಂದಿನ ವರ್ಷ ಬರುತ್ತವೆ?" ಎಂದು ಪ್ರಶ್ನಿಸಿದರು. ಪಕ್ಷಿಗಳಿಗೆ ಮನುಷ್ಯರಷ್ಟು ನೆನಪಿನ ಶಕ್ತಿ ಇರುವುದಿಲ್ಲ. ಆದರೆ ಅವುಗಳ ಜೀನ್ ನಲ್ಲೇ ಆ ಸ್ಥಳದ ಬಗ್ಗೆ ತಿಳಿದಿರುತ್ತದೆ. ಅವುಗಳು ವಲಸೆ ಬಂದು ಮೊಟ್ಟೆ ಇಟ್ಟು ಮರಿಮಾಡಿ ವಾಪಸ್ ಹೋಗಿ ಮುಂದಿನ ವರ್ಷ ಮತ್ತೆ ಅದೇ ಜಾಗಕ್ಕೆ ಬರುತ್ತವೆ ಎಂದು ಹೇಳಿದರು. ಈ ವರ್ಷ ವಲಸೆ ಪಕ್ಷಿಗಳು ಕಡಿಮೆ ಬಂದಿವೆ, ಬೇರೆ ದೇಶದ ಪಕ್ಷಿಗಳು ತಮ್ಮ ಪ್ರದೇಶದಲ್ಲಿನ ಚಳಿಗಾಲದಿಂದ ಬಚಾವ್ ಆಗಲು ಈ ಕಡೆ ಬರುತ್ತವೆಂದು ಹೇಳಿದರು. ವೀರೇಶ್ ಸರ್ ಅಲ್ಲಿನ ಸಿಬ್ಬಂದಿಗೆ ಕರೆ ಮಾಡಿ ಕೆರೆಯೊಳಗೆ ಬೋಟ್ ನಲ್ಲಿ ವಿಹರಿಸಲು ಚಾವಿ ತರುವಂತೆ ಹೇಳಿದರು. ಕೂಡಲೇ ಅವರು ಬಂದು ನಾಲ್ಕು ಜನರನ್ನು ಕೂರಿಸಿಕೊಂಡು ಕೆರೆಯೊಳಗಿನ ಪ್ರಪಂಚದ ರುಚಿ



ತೋರಿಸಿದರು. ಕೆರೆಯ ಮಧ್ಯದಲ್ಲಿ ಗಿಡದ ಮೇಲೆ ನೀರು ಕಾಗೆ, Spoon bill ಗಳನ್ನು ನೋಡಿ ಫೋಟೋಗಳನ್ನು ಕ್ಲಿಕ್ಕಿಸಿಕೊಂಡೆವು. ಅಲ್ಲಿನ ಮುಳ್ಳಿನ ಪೊದೆಯೊಳಗೆ ಕೆಲ ಪಕ್ಷಿಗಳು ಸತ್ತು ಬಿದ್ದಿದ್ದು ನೋಡಿ ಬೇಸರವಾಯಿತು. ಅವುಗಳ ಪಕ್ಕದಲ್ಲೇ ಒಂದು ಮರದಲ್ಲಿದ್ದ ಹದ್ದು ನಾವು ಹೋಗುತ್ತಿದ್ದಂತೆಯೆ ಮೇಲೆ ಹಾರಿ ಒಂದು ಸುತ್ತು ಹೊಡೆದು ಬಂದು ಅಲ್ಲಿಯೇ ಕುಳಿತಿತು. ಅದನ್ನು ನೋಡುತ್ತಲೇ ಬೋಟ್ ಪ್ರಯಾಣ ಮುಗಿಸಿ ಹೊರ ಬಂದು ತಿಂಡಿಯನ್ನು ತಿಂದು, ಚಹಾ ಕುಡಿದು ಮುಂಡಗೋಡು ಕಡೆ ನಮ್ಮ ಪಯಣ ಬೆಳೆಸಿದೆವು. ಇಷ್ಟೊತ್ತಿಗೆ ಮಹೇಶ್ ರವರ ಸ್ನೇಹ ಹತ್ತಾರು ವರ್ಷಗಳಿದ್ದಂತೆ ಭಾಸವಾಯಿತು. ಅವರ ನಗು, ಮುಗ್ದತೆ, ಸೂಕ್ಷ್ಮತೆ, ವಿಚಾರಶೀಲತೆಗೆ, ಶ್ರದ್ಧೇ ಮತ್ತು ತಾಳ್ಮೆಗೆ ಯಾವ ಪ್ರಶಸ್ತಿಯನ್ನು ಕೊಟ್ಟರೂ ಸಾಲದು. ಒಟ್ಟಾರೆ ಪಕ್ಷಿಗಳ ಪ್ರಪಂಚದಿಂದ ನಾವುಗಳು ಕಲಿಯಬೇಕಿರುವುದು ಸಾಕಷ್ಟಿದೆ ಎಂಬುದು ಅರ್ಥವಾಯಿತು.

**ಮುಂದುವರೆಯುವುದು** . . . . . . . . . . . . . . . .




**ಚಿತ್ರ-ಲೇಖನ:** **ಮಂಜುನಾಥ್ ಅಮಲಗೊಂದಿ.**
**ತುಮಕೂರು ಜಿಲ್ಲೆ.**




# ಕಸ್ತೂರಿ ಚಿಟ್ಟೆ ಕೋಶದಿಂದ ಹೊರ ಬಂದ ಕಥನ

ಚೈತ್ರನ ಆಗಮನದಿಂದ ಪ್ರಕೃತಿಯಲ್ಲಿ ಗಿಡ-ಮರಗಳು ಚಿಗುರುತ್ತಿದ್ದವು. ಕಂತೀಸ್ವಾಮಿ ಮಠದ ಆವರಣದ ತೋಟದಲ್ಲಿರುವ ಕರಿಬೇವಿನ ಗಿಡವು ಇದಕ್ಕೆ ಹೊರತಾಗಿರಲಿಲ್ಲ. ಚಿಕ್ಕ ರೆಂಬೆಯ ಚಿಗುರೆಲೆ ಎಸಳಿನಲ್ಲಿ ಎಲೆಯ ಬಣ್ಣವನ್ನೇ ಹೋಲುವ ಹಸಿರಿನ ಕಂಬಳಿಹುಳುವು ಚಿಗುರೆಲೆಗಳನ್ನು ಬಕಾಸುರನಂತೆ ಭಕ್ಷಿಸುತ್ತಿತ್ತು. ಮನೆಗೆ ಬಂದು ಕ್ಯಾಮರಾವನ್ನು ತೆಗೆದುಕೊಂಡು ಹೋಗಿ ಅದರ ಫೋಟೊ ಕ್ಲಿಕ್ಕಿಸಿಕೊಂಡೆ. ಆ ಕಂಬಳಿಹುಳುವು ಕಸ್ತೂರಿ ಚಿಟ್ಟೆಯದಾಗಿತ್ತು. ಹಿಂದೆ ಕಸ್ತೂರಿ ಚಿಟ್ಟೆಗಳು ಈ ಮಠದ ಆವರಣದಲ್ಲಿ ಮಿಲನಗೊಂಡಿರುವುದನ್ನು ಕಂಡು ಫೋಟೋ ಕ್ಲಿಕ್ಕಿಸಿಕೊಂಡಿದ್ದೆ.

ದಿನವೂ ಮಠದ ಆವರಣದಲ್ಲಿರುವ ಕರಿಬೇವಿನ ಗಿಡದಲ್ಲಿಯ ಕಂಬಳಿಹುಳದ ಬೆಳವಣಿಗೆಯನ್ನು ವೀಕ್ಷಿಸಿ, ಫೋಟೊ ಕ್ಲಿಕ್ಕಿಸಿಕೊಂಡು ದಾಖಲಿಸತೊಡಗಿದೆ. ದಿನದಿಂದ ದಿನಕ್ಕೆ ಅದು ಬೆಳೆಯುತ್ತಾ ದೊಡ್ಡದಾಗ ತೊಡಗಿತು. ಅದು ಹಚ್ಚಹಸಿರು ಬಣ್ಣದ್ದಾಗಿದ್ದು ದೇಹದ ನಾಲ್ಕನೇ ಖಂಡದ ಮೇಲ್ಭಾಗದಲ್ಲಿ ಸುಂದರವಾದ ಅಡ್ಡಪಟ್ಟೆಗಳಿದ್ದು ಈ ಪಟ್ಟೆಗಳ ತುದಿಯಲ್ಲಿ ಕಣ್ಣಿನಂತಹ ರಚನೆಯಿದೆ. ಐದನೇ ಖಂಡದಲ್ಲಿ ಬಿಳಿ ಮಚ್ಚೆಗಳ ಕಂದುಪಟ್ಟೆಯು ಎರಡೂ ಬದಿಯಲ್ಲಿ ಸೇರಿಕೊಂಡಿವೆ. ಎಂಟು ಹಾಗೂ ಒಂಬತ್ತನೇ ಖಂಡಗಳ ಎರಡು ಬದಿಯಲ್ಲಿ ಕಂದು-ಬಿಳಿ ಬಣ್ಣದ ಮಚ್ಚೆಯಿದೆ. ಹತ್ತನೆಯ ಖಂಡದ ಎರಡು ಮಗ್ಗಲಿನಲ್ಲಿ ದೊಡ್ಡದಾದ ಬಿಳಿ-ಕಂದು ಮಚ್ಚೆಯಿದೆ. ಆರನೆಯ ಖಂಡದಿಂದ ಕೊನೆಯ ಖಂಡದ ಎರಡು ಮಗ್ಗಲಿನಲ್ಲಿ ಬಿಳಿ ಪಟ್ಟೆಯಿದೆ. ಈ ಕಂಬಳಿಹುಳು ಸುಮಾರು ನಲವತ್ತು ಎಂ. ಎಂ. ಉದ್ದವಾಗಿದೆ. ದಿನವು ನನ್ನ ವೀಕ್ಷಣೆ ಮುಂದುವರೆದಿತ್ತು.

ಎಂದಿನಂತೆ ಆ ದಿನ ಮುಂಜಾನೆ ಕರಿಬೇವಿನ ಗಿಡದ ಸನಿಹಕ್ಕೆ ಹೋದಾಗ ನನಗೆ ಅಚ್ಚರಿ ಕಾಯ್ದಿತ್ತು. ಕಂಬಳಿಹುಳುವು ಸೂಕ್ಷ್ಮ ರೇಷ್ಮೆಯಂತಹ ದಾರದಿಂದ ತನ್ನ ಎದೆಯಿಂದ ರೆಂಬೆಯ ಎಸಳಿಗೆ ತನ್ನನ್ನು ಬಂಧಿಯಾಗಿಸಿಕೊಂಡು ನಿಶ್ಚಲವಾಗಿ ತಲೆ ಕೆಳಗಾಗಿ ನೇತಾಡುತ್ತಾ ಕುಳಿತಿತ್ತು. ಹೌದು ಅದು



ಕೋಶಾವಸ್ಥೆಗೆ ಮಾರ್ಪಡುತ್ತಿತ್ತು, ನೈಸರ್ಗಿಕ ತಪಸ್ಸಿಗೆ ಸನ್ನದ್ಧವಾಗಿದ್ದು ಅದರ ರೂಪಾಂತರ ಧ್ಯಾನಕ್ಕೆ ಧಕ್ಕೆಯನ್ನು ತರದೇ ಎರಡು ಫೋಟೋ ಕ್ಲಿಕ್ಕಿಸಿಕೊಂಡು ಮನೆಗೆ ಮರಳಿದೆ. ಮರುದಿನ ಬೆಳಿಗ್ಗೆ ಹೋದಾಗ ಲವಲವಿಕೆಯಿಂದ ಗಿಡದ ತುಂಬೆಲ್ಲಾ ಓಡಾಡಿಕೊಂಡಿದ್ದ ಕಂಬಳಿಹುಳು ಕೋಶವಾಗಿ ಮಾರ್ಪಟ್ಟಿತ್ತು. ಈ ಕೋಶವು ಹಸಿರು ಬಣ್ಣದ್ದಿದ್ದು ಮಧ್ಯದಲ್ಲಿ ಹಳದಿ ಮಿಶ್ರಿತ ಹಸಿರು. ತಲೆಯ ಮುಂಭಾಗದಲ್ಲಿ ಎರಡು ಮೊನಚಾದಂತಿರುವ ರಚನೆಗಳಿವೆ. ಎದೆ ಭಾಗವು ಸ್ವಲ್ಪ ಉಬ್ಬಿಕೊಂಡಿದೆ. ಈ ಕೋಶವು ಸುಮಾರು ಮೂವತ್ತೊಂದು ಎಂ.ಎಂ. ಉದ್ದವಾಗಿದೆ. ಕೋಶದಲ್ಲಿ ಚಿಟ್ಟೆಯ ರೂಪಾಂತರ ಬೆಳವಣಿಗೆ ನಡೆಯುವುದು ನಮ್ಮ ಗಮನಕ್ಕೆ ಬರುವುದೇ ಇಲ್ಲ, ಕೋಶದ ಒಳಗೆ ಕಣ್ಣು, ರೆಕ್ಕೆ, ಗ್ರಹಣಾಂಗ, ಕಾಲುಗಳು ಮೂಡತೊಡಗುತ್ತವೆ. ಪ್ರೌಢಚಿಟ್ಟೆಯಾಗಿ ಕೋಶದಿಂದ ಹೊರಬರಲು ಸರಿ ಸುಮಾರು ಎಂಟರಿಂದ ದಿನಗಳು ಬೇಕಾಗುತ್ತದೆ. ಈ ನಡುವೆ ಒಂದುದಿನ ಸಾಯಂಕಾಲ ಜೋರಾಗಿ ಮಳೆ ಬಂದಾಗ ಎಲ್ಲಿ ಕೋಶವು ಬಿದ್ದು ಹೋಗುತ್ತೊ ಎಂಬ ಆತಂಕ ಕಾಡಿತು. ಮಳೆ ಬಿಟ್ಟ ತಕ್ಷಣ ಹೋಗಿ ಟಾರ್ಚ್ ಹಿಡಿದು ಮಠದ ಆವರಣದಲ್ಲಿರುವ ಕರಿಬೇವಿನ ರೆಂಬೆಗೆ ನೇತಾಡುತ್ತಿದ್ದ ಕೋಶವನ್ನು ನೋಡಿದಾಗ ಮನಸ್ಸಿಗೆ ನೆಮ್ಮದಿಯಾಯಿತು. ನಾನು ದಿನಬಿಟ್ಟು ದಿನ ಆ ಕೋಶವನ್ನು ಹೋಗಿ ನೋಡಿ ಬರುವುದನ್ನು ಕಾಯಕವನ್ನಾಗಿಸಿಕೊಂಡೆ.




ಎಂಟನೆಯ ದಿನ ಮುಂಜಾನೆ ಏಳುಗಂಟೆಗೆ ಕ್ಯಾಮರಾ ಹಿಡಿದು ಕಂತೀಸ್ವಾಮಿ ಮಠದ ಆವರಣದ ಕೋಶವಿದ್ದ ಕರಿಬೇವಿನ ಎಸಳನ್ನು ನೋಡಿದರೆ ಆಗಲೆ ಪ್ರೌಢ ಚಿಟ್ಟೆಯು ಕೋಶದಿಂದ ಹೊರ ಬಂದು ಕೋಶಬಿಂಬ ಹಾಗೂ ಎಲೆಯನ್ನು ಕಾಲಿನಿಂದ ಹಿಡಿದು ಜೋತಾಡುತ್ತಾ ಕುಳಿತಿತ್ತು. ನವಜಾತ ಪ್ರೌಢ ಚಿಟ್ಟೆಯು ಗಂಡು ಕಸ್ತೂರಿ ಚಿಟ್ಟೆಯಾಗಿತ್ತು. ಕಸ್ತೂರಿ ಚಿಟ್ಟೆಯನ್ನು ಆಂಗ್ಲಭಾಷೆಯಲ್ಲಿ ಕಾಮನ್ ಮಾರ್ಮೊನ್ (Common Mormon) ಎಂದು ಕರೆದು, ವೈಜ್ಞಾನಿಕವಾಗಿ ಪ್ಯಾಪಿಲಿಯೊ ಪಾಲಿಟ್ಸ್ (Papilio polytes) ಎಂದು ಹೆಸರಿಸಿ, ಸಂಧಿಪದಿಗಳ ಕೀಟ (Insecta) ವರ್ಗದ, ಲೆಪಿಡೋಪ್ಟೆರಾ (Lepidoptera) ಗಣದ, ಬಾಲದ ಚಿಟ್ಟೆಗಳ (Swallow tail Butterflies) ಪ್ಯಾಪಿಲಿಯಾನಿಡೇ (Papilionidae) ಕುಟುಂಬಕ್ಕೆ ಸೇರಿಸಲಾಗಿದೆ.

ಸುಮಾರು ತೊಂಭತ್ತರಿಂದ ನೂರು ಮಿ.ಮೀಟರ್ ರೆಕ್ಕೆಗಳ ಹರವು ಹೊಂದಿರುವ ಮಧ್ಯಮ ಗಾತ್ರದ ಕಪ್ಪಾದ ಚಿಟ್ಟೆ. ಮುಂದಿನ ಹಾಗೂ ಹಿಂದಿನ ರೆಕ್ಕೆಗಳು ಮತ್ತು ದೇಹಕೋಶವು ಕಪ್ಪಾಗಿದೆ. ಮುಂದಿನ ರೆಕ್ಕೆಗಳ

ಅಂಚಿನಲ್ಲಿ ಬಿಳಿ ಮಚ್ಚೆಗಳಿವೆ. ಹಿಂದಿನ ರೆಕ್ಕೆಗಳ ಮುಂಭಾಗದ ತಳದ ಹೊರಭಾಗದಲ್ಲಿ ಬಿಳಿ ಮಚ್ಚೆಗಳ ಪಟ್ಟಿಯಿದೆ. ಹಿಂದಿನ ರೆಕ್ಕೆಗಳ ಮೇಲಿನ ಅಂಚಿನ ಒಳಭಾಗದಲ್ಲಿ ಸಣ್ಣ ಕೆಂಪು ಮಚ್ಚೆಗಳಿರುವ ಸಾಲಿದೆ ಮತ್ತು ಅಂಚಿನಲ್ಲಿ ಅರ್ಧ ಚಂದ್ರಾಕೃತಿಯ ಬಿಳಿ ಮಚ್ಚೆಗಳು ಮತ್ತು ಬಾಲವಿದೆ. ಹಗಲೆಲ್ಲಾ ಚುರುಕಾಗಿದ್ದು ನೆಲಮಟ್ಟದಿಂದ ಸ್ವಲ್ಪ ಎತ್ತರದಲ್ಲಿ ಮಧ್ಯಮ ವೇಗದಲ್ಲಿ ಹಾರಾಡುತ್ತಿರುತ್ತವೆ. ಹೂವಿನಿಂದ ಮಕರಂದ ಹೀರುವಾಗ ರೆಕ್ಕೆಗಳನ್ನು ಬಡಿಯುತ್ತಿರುತ್ತವೆ. ಮುಂಜಾನೆ ಹಾಗೂ ಸಂಜೆ ರೆಕ್ಕೆಗಳನ್ನು ಅಗಲಿಸಿಕೊಂಡು ಗಿಡಗಳ ಮೇಲೆ ಕುಳಿತು ವಿಶ್ರಾಂತಿ ಪಡೆಯುತ್ತವೆ. ಕುರುಚಲು ಕಾಡು, ಎಲೆ ಉದುರಿಸುವ ಕಾಡು, ನಿತ್ಯ ಹರಿದ್ವರ್ಣ ಕಾಡು, ಕೃಷಿ ಭೂಮಿ, ತೋಟಗಾರಿಕೆ ಪ್ರದೇಶಗಳು ಇವುಗಳ ಆವಾಸ ತಾಣಗಳಾಗಿವೆ. ಕರಿಬೇವು, ಬಿಲ್ವ ಪತ್ರೆ, ಮಾದಳ, ನಿಂಬೆ, ಲಿಂಬೆ ಹಾಗೂ ಕಾಡು ಕರಿಬೇವು ಗಿಡಗಳು ಕಸ್ತೂರಿ ಚಿಟ್ಟೆಯ ಕಂಬಳಿಹುಳದ ಆಹಾರ ಸಸ್ಯಗಳು.




ಸಮಯವು ಜಾರಿದಂತೆ ರೆಕ್ಕೆಗಳ ಒದ್ದೆಯು ಒಣಗಿದಾಗ ನಿಧಾನವಾಗಿ ಕಸ್ತೂರಿ ಚಿಟ್ಟೆಯು ಎಲೆಯ ಮೇಲ್ಭಾಗಕ್ಕೆ ಬಂದು ಹಾರುತ್ತ ಹತ್ತಿರದಲ್ಲಿದ್ದ ಕೊಮ್ಮೆ ಗಿಡದ ಮೇಲೆ ಕುಳಿತು ವಿಶ್ರಾಂತಿ ಪಡೆದು ಮತ್ತೆ ಹಾರುತ್ತಾ ತೋಟದ ಗಿಡಗಳಲ್ಲಿ ಮರೆಯಾಗಿತ್ತು. ಇನ್ನೂ ಮುಂದೆ, ಅಡುಗೆಗೆ ಒಗ್ಗರಣೆ ಹಾಕುವಾಗ ಕರಿಬೇವಿನ ಎಲೆಯಲ್ಲಿ ಕಸ್ತೂರಿ ಚಿಟ್ಟೆಯ ಮೊಟ್ಟೆ, ಕಂಬಳಿಹುಳು ಇವೆಯೆ ಎಂಬುದನ್ನು ಖಾತ್ರಿ ಪಡಿಸಿಕೊಳ್ಳಿ, ಇದ್ದರೆ ಕರಿಬೇವಿನ ಗಿಡದ ಳಿ ಇಟ್ಟುಬನ್ನಿ. ಇದರಿಂದ ಚಿಟ್ಟೆಗಳನ್ನು ಪ್ರಕೃತಿಯಲ್ಲಿ ಸಂರಕ್ಷಿಸಿದಂತಾಗುತ್ತದೆ.







**ಚಿತ್ರ-ಲೇಖನ:** ಶಶಿಧರಸ್ವಾಮಿ ಆರ್. ಹಿರೇಮಠ

ಕದರಮಂಡಲಗಿ, ಹಾವೇರಿ



ವಿವಿ ಅಂಕಣ

# ಸಮುದ್ರದಾಳದ ಗೋಳು!

ನಮ್ಮ ಕೇರಳ ಪ್ರವಾಸ ಮುಗಿಸಿ ವಾಪಾಸ್ ಮನೆಗೆ ತೆರಳುವ ಸಮಯ ಬಂದಾಗಿತ್ತು. ನಮ್ಮ ಪ್ರವಾಸದ ಕೊನೆಯ ತಾಣ ಕ್ಯಾಲಿಕಟ್ ತಲುಪುವಷ್ಟರಲ್ಲಿ ರಾತ್ರಿಯಾಗಿತ್ತು. ಎಡ ಭಾಗದಲ್ಲಿ ಸಮುದ್ರವಿದೆ ಎಂದು ಅಲೆಗಳು ಪದೇ ಪದೇ ಸದ್ದು ಮಾಡಿ ಹೇಳುತ್ತಿದ್ದವು. ಆ ಅಲೆಗಳ ಕೂಗನ್ನು ನಿರ್ಲಕ್ಷಿಸಲು ಮನಸ್ಸು ಬಾರದೆ, ನಮ್ಮ ಕಾರಿಗೆ ನಿಲ್ಲಲು ಜಾಗ ಹುಡುಕಿ ಕೂರಿಸಿ ಅಲೆಗಳ ಅರಸುತ್ತ ಹೊರಟೆವು. ಹೋಗುವ ದಾರಿಯಲ್ಲೇ ಬಣ್ಣ ಬಣ್ಣದ ದೀಪಗಳ ಜೊತೆಗೆ, ಬಣ್ಣ ಬಣ್ಣದ ತಿನಿಸುಗಳು ಕಣ್ಣು ಕುಕ್ಕುವಂತಿದ್ದವು.

ಈಗ ನಾನು ಮತ್ತು ನನ್ನ ಸ್ನೇಹಿತರು ಸಮುದ್ರದ ಅಲೆಗಳಿಗೆ ನಮ್ಮನ್ನು ಮುಟ್ಟುವಂತೆ ಸವಾಲು ಹಾಕಿ ಚಿಕ್ಕ ಮಕ್ಕಳಂತೆ 'ಮುಟ್ಟೋ ಆಟ' ಆಡುತ್ತಿದ್ದೆವು. ಅಂಗಡಿಯಲ್ಲಿ ಇದ್ದ ಬಣ್ಣ ಬಣ್ಣದ ತಿನಿಸುಗಳಲ್ಲಿ ಕೆಲವು ನಮ್ಮ ಕೈ ಸೇರಿದ್ದವು. ಸ್ವಲ್ಪ ಹೊತ್ತಿಗೇ ಆಟ ಸುಸ್ತಾಗಿ ಹಿಂದೆ ಬಂದು ಸಮುದ್ರದ ಅಲೆಗಳನ್ನು ಸೋಲಿಸಿದ ಆನಂದವನ್ನು ಕೂತು ಸವಿಯುತ್ತಿದ್ದೆವು. ನಮಗೆ ಅರಿಯದಂತೇ ಕೈ ಮತ್ತು ಬಾಯಿಯ ಸಂಬಂಧ ತಡೆಯಿಲ್ಲದೇ ಬೆಸೆಯುತ್ತಿತ್ತು. ಇಂಥಾ ಸಮಯದಲ್ಲಿ ನನ್ನ ತಲೆಗೆ ಹೊಳೆದದ್ದು, "ಅರೇ ಇಡೀ ಭೂಮಿಯಲ್ಲಿ ಇಷ್ಟು ಸಮುದ್ರವಿದೆ, ಆದರೆ ನಮ್ಮ ಕಾಡಿನಲ್ಲಿ ಸಿಗುವ ಹಾಗೆ ಒಂದು ಪ್ರಾಣಿಯೂ ಕಣ್ಣಿಗೆ ಕಾಣ ಸಿಗುವುದಿಲ್ಲವಲ್ಲ...! ಇಷ್ಟು ಸಮುದ್ರವಿದ್ದಾದರೂ ಏನು ಪ್ರಯೋಜನ?" ಎನಿಸುತ್ತಿತ್ತು. ಆದರೆ ಸಮುದ್ರದ ಜೀವವೈವಿಧ್ಯದ ಆಳ ಪರಿಚಯಿಸಿದ ಡೇವಿಡ್ ಅಟೆನ್ಬರೋ ನಿರೂಪಣೆಯ ವೀಡಿಯೋಗಳನ್ನು ಎಷ್ಟು ಮೆಚ್ಚಿದರೂ ಸಾಲದು.

ಮೇಲೆ ಶಾಂತವಾಗಿ ಕಾಣುವ ಸಮುದ್ರಗಳ ಒಳಗೆ ನಡೆಯುವ ವಿಸ್ಮಯಗಳನ್ನು ಬಲ್ಲವರೇ ಬಲ್ಲರು. ಹೀಗಿರುವ ಸಮುದ್ರದಾಳದ ವಿಸ್ಮಯಗಳ ಸವಿಯುವ ಬದಲು, ಸಮುದ್ರದ ಆಳಕ್ಕೆ ಹೋಗಿ ಗಣಿಗಾರಿಕೆ ನಡೆಸಿದರೆ ಏನನ್ನುವುದು ಹೇಳಿ? ಅದಿರಲಿ ಕೆಲವರ ಈ ಮಾತು ಕೇಳಿ... "ಅರೇ ಅದರಲ್ಲೇನು ತಪ್ಪು? ಕೆಲವು ಖನಿಜಗಳು ಸಮುದ್ರದ ಆಳದಲ್ಲಿಯೇ ಹೇರಳವಾಗಿ ಸಿಗುತ್ತವೆ. ಈಗ ಪೆಟ್ರೋಲಿಯಮ್ ಪದಾರ್ಥಗಳನ್ನು ಕೊಳವೆ ಬಾವಿ

ಕೊರೆದು ತೆಗೆಯುವ ಹಾಗೆ ತೆಗೆಯುವುದು ಅಷ್ಟೇ!" ಎಂದು ಉದಾಸೀನ ಮಾಡುವವರಿಗೆ ಈ ಸಂಶೋಧನೆ ಎಚ್ಚರಿಕೆ ಘಂಟೆಯೇ ಸರಿ.



1989 ರಿಂದ 1994 ವರೆಗೆ ನಡೆದ DISCOL(DISturbance and reCOLonization) ಎಂಬ ಪ್ರಯೋಗವನ್ನು ಕೈಗೊಳ್ಳಲಾಗಿತ್ತು. ಸಮುದ್ರದ ತಳದಲ್ಲಿ ಸಿಗಬಹುದಾದ ತಾಮ್ರ, ನಿಕ್ಕಲ್ ಮತ್ತು ಕೋಬಾಲ್ಟ್ ನಂತಹ ಅಮೂಲ್ಯ ಲೋಹಗಳ ಅದಿರಿನ ಅನ್ವೇಷಣೆಗಾಗಿ ಅಗೆದ ಪರಿಣಾಮ ಅಲ್ಲಿನ ಸೂಕ್ಷ್ಮಜೀವಿಗಳ ಸಾಮಾಜಿಕ ವ್ಯವಸ್ಥೆ ಅಸ್ತವ್ಯಸ್ತಗೊಂಡಿದೆ. ಹಾಗೂ ಇಪ್ಪತ್ತಾರು ವರ್ಷಗಳ ದೀರ್ಘಾವಧಿಯ ನಂತರವೂ ಅಲ್ಲಿನ ಸೂಕ್ಷ್ಮಜೀವಿಗಳ ಪರಿಸ್ಥಿತಿ ಮೊದಲಿನ ಸ್ಥಿತಿಗೆ ಮರಳಲಿಲ್ಲ ಎಂಬುದು ಹೊಸ ಸಂಶೋಧನೆಯ ವಿಷಾದನೀಯ ಸಾರ.

ಈ ಪ್ರಯೋಗದ ಸಮಯದಲ್ಲಿ ಸಮುದ್ರದ ತಳದಲ್ಲಿ ನಾವು ಹೊಲ ಉಳುವ ರೀತಿಯಲ್ಲಿ ಅಗೆದು ಬಿಡಲಾಗಿತ್ತು. ಆಗಿನ ವಿಜ್ಞಾನಿಗಳ ತಂಡವೂ ಸಹ ಅಲ್ಲಿನ ಜೀವರಾಶಿಯ ಬಗ್ಗೆ ಹಾಗೂ ನೀರಿನ ಮತ್ತು ಮಣ್ಣಿನ ಸಾರಜನಕದ ಚಕ್ರದ ಬಗೆಗಿನ ವಿಚಾರಗಳಿಗೆ ಒಲವು ತೋರಿದ್ದರೂ, ಈ ಗಣಿಗಾರಿಕೆಯಿಂದ ಆಗುವ ಪರಿಣಾಮಗಳ ಬಗೆಗಿನ ವಿಷಯಗಳು ಬೆರಳೆಣಿಕೆಯಷ್ಟಿವೆ. ಜೊತೆಗೆ ಇಷ್ಟು ನಡೆದದ್ದು 1996ರಲ್ಲಿ. ಆದ್ದರಿಂದ ಆರ್ಕ್ಟಿಕ್ ವಿಶ್ವವಿದ್ಯಾಲಯದ ಸೂಕ್ಷ್ಮಜೀವಿ ವಿಜ್ಞಾನಿಗಳು ಮತ್ತೊಂದು ಪ್ರಯೋಗವನ್ನು 2015ರಲ್ಲಿ ಮಾಡಲು ನಿರ್ಧರಿಸಿದರು.



ಅದರಲ್ಲಿ ಇಪ್ಪತ್ತಾರು ವರ್ಷದ ಹಳೆಯ, ಅಗೆದ ಜಾಗವನ್ನು ಐದು ವಾರಗಳ ಹಿಂದೆ ಅಗೆದ ಸಮುದ್ರದ ತಳದ ಜೊತೆಗೆ ಹೋಲಿಸಿ ನೋಡಿದರು. ಗಣಿಗಾರಿಕೆ ನಡೆಯದ ಸಮುದ್ರದ ನೆಲದಲ್ಲಿನ ಸೂಕ್ಷ್ಮಜೀವಿಗಳ ಸಂಖ್ಯೆಗೆ ಹೋಲಿಸಿದರೆ ಐದು ವಾರಗಳ ಹಿಂದೆ ಅಗೆದ ಜಾಗದಲ್ಲಿ ಸೂಕ್ಷ್ಮಜೀವಿಗಳ ಸಂಖ್ಯೆ ಐವತ್ತರಷ್ಟು ಕಡಿಮೆಯಾಗಿದ್ದರೆ, ಇಪ್ಪತ್ತಾರು ವರ್ಷಗಳ ಹಳೆಯ ಅಗೆದ ಜಾಗದಲ್ಲಿ ಈಗಲೂ ಸೂಕ್ಷ್ಮಜೀವಿಗಳ ಸಂಖ್ಯೆ ಮೂವತ್ತರಷ್ಟು ಕಡಿಮೆ ಇದೆ. ಹಾಗೂ ಇಷ್ಟು ಬದಲಾಗಿರುವ ಅಲ್ಲಿನ ಜೀವಿಗಳ ಜೀವನ ಶೈಲಿ ಯಥಾಸ್ಥಿತಿಗೆ ಮರಳಲು ಇನ್ನೂ ಐವತ್ತು ವರ್ಷಗಳು ಬೇಕು ಎನ್ನುತ್ತಿದ್ದಾರೆ ವಿಜ್ಞಾನಿಗಳು.

ನಮ್ಮ ಬಿಡುವಿಲ್ಲದ ಸ್ವ-ವಿನಾಶಕಾರಿ ಪ್ರಯತ್ನಗಳನ್ನು ಮುಂದುವರಿಸುವ ಮುಂಚೆ ಸಮುದ್ರದ ಆಳದಷ್ಟು ಯೋಚಿಸಬೇಕೆಂದು, ತನ್ನ ಗೋಳು ತೋಡಿಕೊಳ್ಳುತ್ತಿರುವ ಸಮುದ್ರದ ಅಳಲಿನ ಮೂಲಕ ಹೇಳುತ್ತಿರುವ, ಪ್ರಕೃತಿಯ ಮಾತುಗಳ ಆಲಿಸಲು ಇದಕ್ಕಿಂತ ಉತ್ತಮ ನಿದರ್ಶನ ಬೇಕಿಲ್ಲ ಎಂಬುದು ನನ್ನ ಅನಿಸಿಕೆ. ನಿಮ್ಮ ಅನಿಸಿಕೆಗಳನ್ನು ನಮಗೆ ಬರೆದು ತಿಳಿಸಿ.

ನಮ್ಮ ಇ-ಮೇಲ್ ವಿಳಾಸ: kaanana.mag@gmail.com



ಲೇಖನ: ಜೈಕುಮಾರ್ ಆರ್.
ಡಬ್ಲ್ಯೂ. ಸಿ. ಜಿ., ಬೆಂಗಳೂರು



# ಬಾ ಮಳೆಯೇ ಬಾ

ಬಾ ಮಳೆಯೇ ಬಾ ಇಳೆಗೆ
ಭೋರ್ಗರೆಯುತಾ
ಗುಡುಗುಡುಗಿ
ಮಿಂಚಾಗಿ
ತಂಪನೆರೆಯುತಾ
ಬಿರಿದಿಹುದು ಈ ಧರಣಿ
ನೋವಿಂದ ಒಳಗೊಳಗೆ
ಪ್ರಾರ್ಥಿಸಿರುವರು ಜನರೆಲ್ಲಾ
ಬರಲೆಂದು ನೀ ಕೆಳಗೆ
ನೀ ಬಂದರೆ ಪರಿಸರವೆಲ್ಲಾ ಹಸಿರು
ಹನಿಹನಿಯಲ್ಲೂ ಚೈತನ್ಯದ ಉಸಿರು
ನಿನ್ನ ಆಗಮನದಿ ಈ ನಿಸರ್ಗ
ಕಣ್ಮನ ತಣಿಸುವ ಹಸಿರ ಸ್ವರ್ಗ
ಬಿಡದೆ ಸುರಿಯುತಿರಲು ಇಳೆಗೆ ಮಳೆ
ಧರಣಿಯ ತುಂಬೆಲ್ಲಾ ಸಂತೋಷದ ಕಳೆ
ಜಗವೆಲ್ಲಾ ಆವರಿಸಿರಲು ವರುಣಧಾರೆ
ಭೂಮಿಯು ಕಂಗೊಳಿಸಿಹುದು ಉಟ್ಟಂತೆ
ಹಸಿರು ಸೀರೆ
ಬಾ ಮಳೆಯೇ ಬಾ ಇಳೆಗೆ
ಭೋರ್ಗರೆಯುತಾ
ಬಿಸಿಲ ಬೇಗೆಗೆ
ಬಳಲಿದ ಈ ಧರೆಗೆ
ತಂಪನೆರೆಯುತಾ

- ಜನಾರ್ದನ ಗೊರ್ಟೆ
ಭಟ್ಕಳ

# ಪ್ರಕೃತಿ ಬಿಂಬ



ಬಾರ್ ಟೈಲ್ಡ್ ಗಾಡ್‌ವಿಟ್ © ಹಯಾತ್ ಮೊಹಮ್ಮದ್

ಬಾರ್-ಟೈಲ್ಡ್ ಗಾಡ್ವಿಟ್ ಪಕ್ಷಿಯು Scolopacidae ಕುಟುಂಬಕ್ಕೆ ಸೇರಿದ್ದು, ಸಮುದ್ರ ದಂಡೆಯಲ್ಲಿ ವಾಸಿಸುವ ಪಕ್ಷಿಯಾಗಿದೆ. ಸಾಮಾನ್ಯವಾಗಿ ಗಂಡು ಬಾರ್-ಟೈಲ್ಡ್ ಗಾಡ್ವಿಟ್ ಗಳು ಹೆಣ್ಣು ಪಕ್ಷಿಗಳಿಗಿಂತ ಗಾತ್ರದಲ್ಲಿ ಚಿಕ್ಕದಾಗಿರುತ್ತವೆ. ವಯಸ್ಕ ಪಕ್ಷಿಗಳಿಗೆ ಉದ್ದವಾಗಿ ಮೊನಚಾಗಿರುವ ಕೊಕ್ಕನ್ನು ಹೊಂದಿರುತ್ತವೆ ಹಾಗು ಕಾಲುಗಳು ನೀಲಿ-ಬೂದು ಬಣ್ಣದಿಂದಿರುತ್ತವೆ. ಹೆಚ್ಚಾಗಿ ಸಮುದ್ರ ದಂಡೆಯಲ್ಲಿ ಅಕಶೇರುಕಗಳನ್ನು ತಿನ್ನುತ್ತವೆ ಹಾಗು ಮೃದ್ವಂಗಿಗಳನ್ನು ಸಂಪೂರ್ಣವಾಗಿ ನುಂಗುತ್ತವೆ. ಆಸ್ಟ್ರೇಲಿಯಾ ಮತ್ತು ನ್ಯೂಜಿಲೆಂಡ್ ನಲ್ಲಿ ಸಂತಾನೋತ್ಪತ್ತಿ ಮಾಡುವ ಇವುಗಳು ಆಳವಿಲ್ಲದ ಪಾಚಿಗಳ ಮೇಲೆ ವೃತ್ತಾಕಾರದಲ್ಲಿ ಗೂಡನ್ನು ಮಾಡಿ ಮೂರರಿಂದ ಐದು ಮೊಟ್ಟೆಗಳನ್ನಿಟ್ಟು ಇಪ್ಪತ್ತರಿಂದ ಇಪ್ಪತ್ತೈದು ದಿನಗಳ ಕಾಲ ಕಾವುಕೊಡುತ್ತವೆ. ಹೆಣ್ಣು ಪಕ್ಷಿಗಳು ಬೆಳಕಿದ್ದಾಗ ಕಾವು ಕೊಟ್ಟರೆ ಗಂಡು ಪಕ್ಷಿಗಳು ರಾತ್ರಿಯಲ್ಲಿ ಕಾವುಕೊಡುತ್ತವೆ.



ಬ್ಲಾಕ್ ವಿಂಗ್ಡ್ ಸ್ಟಿಲ್ಟ್ © ಹಯಾತ್ ಮೊಹಮ್ಮದ್

ಕಪ್ಪು ರೆಕ್ಕೆಯ ಸ್ಟಿಲ್ಟ್ ಉದ್ದ ಕಾಲಿನ ಪಕ್ಷಿಯಾಗಿದ್ದು ಅವೊಸೆಟ್ ಮತ್ತು ಸ್ಟಿಲ್ಟ್ ಕುಟುಂಬಕ್ಕೆ ಸೇರಿರುತ್ತದೆ. ಹಿಮಾಂಟೋಪಸ್ (*Himantopus*) ಇದರ ವೈಜ್ಞಾನಿಕ ಹೆಸರು ಗ್ರೀಕ್ ಭಾಷೆಯಿಂದ ಬಂದಿದ್ದು "ಸ್ಟ್ರಾಪ್ ಫೂಟ್" ಅಥವಾ "ಥಾಂಗ್ ಫೂಟ್" ಎಂಬ ಅರ್ಥವನ್ನು ನೀಡುತ್ತದೆ. ವಯಸ್ಕ ಪಕ್ಷಿಗಳು ಮೂವತ್ತರಿಂದ ಮೂವತ್ತೆಂಟು ಸೆಂ.ಮೀ ಉದ್ದವಿರುತ್ತವೆ, ಗುಲಾಬಿ ಬಣ್ಣದ ಉದ್ದನೆಯ ಕಾಲುಗಳು, ಕಪ್ಪಗೆ ತೆಳುವಾದ ಕೊಕ್ಕಿನೊಂದಿಗೆ ದೇಹದ ಮೇಲ್ಭಾಗದಲ್ಲಿ ಕಪ್ಪು ಮತ್ತು ಕೆಳಭಾಗದಲ್ಲಿ ಬಿಳಿಬಣ್ಣವನ್ನು ಹೊಂದಿರುತ್ತದೆ. ಈ ಎಲ್ಲಾ ಸ್ಟಿಲ್ಟ್ ಗಳ ಸಂತಾನೋತ್ಪತ್ತಿ ಆವಾಸ ಸ್ಥಾನವೆಂದರೆ ಜವುಗು ಪ್ರದೇಶಗಳು, ಆಳವಿಲ್ಲದ ಸರೋವರಗಳು ಮತ್ತು ಕೊಳಗಳು. ಇವು ಹಳದಿ ಪದರದ ಮೇಲೆ ಕಪ್ಪು ಚುಕ್ಕೆಗಳಂತೆ ಕಾಣುವ ಮೊಟ್ಟೆಗಳನ್ನಿಡುತ್ತವೆ. ಇವುಗಳು ಹೆಚ್ಚಾಗಿ ಜಲಚರಗಳನ್ನು ಆಹಾರವಾಗಿ ಅವಲಂಬಿಸಿವೆ ತಮ್ಮ ಉದ್ದನೆಯ ಕಾಲುಗಳ ಉಪಯೋಗದಿಂದ ವಿರಳವಾಗಿ ಈಜುತ್ತವೆ ಹಾಗೂ ನೀರಿನಲ್ಲಿ ನಡೆಯುತ್ತಲೇ ಬೇಟೆಯಾಡುತ್ತವೆ.



ಬ್ರೌನ್ ಹೆಡ್ಡೆಡ್ ಗುಲ್ © ಹಯಾತ್ ಮೊಹಮ್ಮದ್

ಕಂದು-ತಲೆಯ ಗಲ್ ಹಕ್ಕಿಗಳು ಮಧ್ಯ ಏಷ್ಯಾದ ಪ್ರಸ್ಥಭೂಮಿಗಳಲ್ಲಿ ತಜಕಿಸ್ತಾನದಿಂದ ಮಂಗೋಲಿಯಾದ ಓರ್ಡೋಸ್ ವರೆಗೆ ಸಂತಾನೋತ್ಪತ್ತಿ ಮಾಡುತ್ತವೆ. ಭಾರತದ ಕರಾವಳಿಗಳಲ್ಲಿ ಚಳಿಗಾಲದಂದು ವಲಸೆ ಬರುವುದು ಕಾಣಸಿಗುತ್ತದೆ. ಈ ಗಲ್ ಗಳು ಗುಂಪು ಗುಂಪಾಗಿ ಜೌಗು ಪ್ರದೇಶ ಮತ್ತು ಸಮುದ್ರದ ದ್ವೀಪಗಳಲ್ಲಿ ನೆಲದ ಮೇಲೆ ಗೂಡುಕಟ್ಟುತ್ತವೆ. ಇವುಗಳು ಕಾಗೆಗಳಂತೆ ಅವಕಾಶವಾದಿ ಭಕ್ಷಕರಾಗಿರುವುದರಿಂದ ಪಟ್ಟಣಗಳಲ್ಲಿ ಹರಿದಾಡುತ್ತವೆ ಮತ್ತು ಉಳುಮೆ ಮಾಡಿದ ಹೊಲಗಳಲ್ಲಿ ಸಿಗುವ ಅಕಶೇರುಕಗಳನ್ನು ತೆಗೆದುಕೊಳ್ಳುತ್ತವೆ. ಕಂದು-ತಲೆಯ ಗಲ್ ಕಪ್ಪು-ತಲೆಯ ಗಲ್ ಗಿಂತ ಸ್ವಲ್ಪ ದೊಡ್ಡದಾಗಿರುತ್ತದೆ. ಮಸುಕಾದ ಬೂದು ದೇಹ ಹಾಗು ಬಿಲ್ ಮತ್ತು ಕಾಲುಗಳು ಕೆಂಪು ಬಣ್ಣದ್ದಾಗಿರುತ್ತವೆ. ಈ ಪಕ್ಷಿಗಳಿಗೆ ಎರಡು ವರ್ಷಗಳಾಗುವವರೆಗು ಸಂಯೋಗ ನಡೆಸಲಾಗುವುದಿಲ್ಲ. ಮೊದಲ ಒಂದು ವರ್ಷದಲ್ಲಿ ಇದರ ಬಾಲದ ತುದಿಯು ಕಪ್ಪು ಬಣ್ಣದಿಂದಿರುತ್ತದೆ ಹಾಗು ರೆಕ್ಕೆಯು ಗಾಢ ಬೂದು ಬಣ್ಣದಿಂದಿರುತ್ತದೆ. ಕ್ರಮೇಣ ಬಾಲದ ತುದಿಯು ಬಿಳಿಬಣ್ಣಕ್ಕೆ ತಿರುಗುತ್ತವೆ ಹಾಗು ರೆಕ್ಕೆಯು ತಿಳಿ ಬೂದು ಬಣ್ಣವಾಗುತ್ತವೆ.



ಡಾರ್ಟರ್ © ಹಯಾತ್ ಮೊಹಮ್ಮದ್

ಡಾರ್ಟರ್ ಅಥವ ಹಾವಕ್ಕಿ ಇವುಗಳು ಜಲಚರ ಪಕ್ಷಿಗಳಾಗಿದ್ದು ಅನ್ಹಿಂಗಿಡೆ (Anhingidae ) ಕುಟುಂಬಕ್ಕೆ ಸೇರುತ್ತವೆ. ತಮ್ಮ ದೇಹವು ನೀರಲ್ಲಿ ಮುಳುಗಿದ್ದಾಗ ಉದ್ದನೆಯ ಕುತ್ತಿಗೆ ನೀರಿನ ಮೇಲ್ಭಾಗದಲ್ಲಿ ಹಾವಿನಂತೆ ಭಾಸವಾಗುತ್ತವೆ. ಇದರಿಂದಾಗಿ ಹಾವಕ್ಕಿ (Snakebird) ಎಂದು ಸಹ ಇವನ್ನು ಕರೆಯಲಾಗುತ್ತದೆ. ಇವುಗಳಿಗೆ ಜಾಲಪಾದವಿದ್ದು ನೀರಿನಲ್ಲಿ ಸರಾಗವಾಗಿ ಈಜಿ ಬೇಟೆಯಾಡಬಲ್ಲವು. ಡಾರ್ಟರ್ ಗಳು ಮುಖ್ಯವಾಗಿ ಮಧ್ಯಮ ಗಾತ್ರದ ಮೀನುಗಳನ್ನು ತಿನ್ನುತ್ತವೆ, ಹೆಚ್ಚು ವಿರಳವಾಗಿ, ಇತರ ಜಲಚರ ಕಶೇರುಕಗಳನ್ನು ಮತ್ತು ಅಕಶೇರುಕಗಳನ್ನು ತಿನ್ನುತ್ತವೆ. ಹಾವಕ್ಕಿಗಳು ಮಾಂಸಹಾರಿ ಪಕ್ಷಿಗಳಾಗಿದ್ದು ಇತರ ಮಾಂಸಹಾರಿ ಪಕ್ಷಿಗಳಾದ ಹದ್ದುಗಳ ಹಾಗೆ ನೀರಿನ ಮೇಲೆಯೇ ಬೇಟೆಯಾಡುವುದಿಲ್ಲ, ಬದಲಾಗಿ ತಮ್ಮ ಬೇಟೆಯನ್ನು ನೀರಿನಲ್ಲಿ ಅಟ್ಟಿಸಿಕೊಂಡು ಹೋಗಿ ಹಿಡಿಯುತ್ತವೆ. ವರ್ಷದ ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ನಾಲ್ಕರಿಂದ ಆರು ಮೊಟ್ಟೆಗಳನ್ನು ಇಪ್ಪತ್ತರಿಂದ ನಲ್ವತ್ತೆಂಟು ಗಂಟೆಗಳಲ್ಲಿಟ್ಟು ಇಪ್ಪತ್ತೈದರಿಂದ ಮೂವತ್ತು ದಿನಗಳ ಕಾಲ ಕಾವುಕೊಟ್ಟು ಮರಿಮಾಡುತ್ತವೆ. ಈ ಪಕ್ಷಿಗಳು ಲೈಂಗಿಕ ಪ್ರಬುದ್ಧತೆಯನ್ನು ತಲುಪಲು ಸುಮಾರು ಎರಡು ವರ್ಷಗಳ ಕಾಲ ತೆಗೆದುಕೊಳ್ಳುತ್ತವೆ ಮತ್ತು ಸಾಮಾನ್ಯವಾಗಿ ಒಂಬತ್ತು ವರ್ಷಗಳವರೆಗೆ ಬದುಕುತ್ತವೆ.

**ಛಾಯಾಚಿತ್ರ: ಹಯಾತ್ ಮೊಹಮ್ಮದ್**

**ಲೇಖನ: ಧನರಾಜ್ ಎಂ.**

# ನೀವೂ ಕಾನನಕ್ಕೆ ಬರೆಯಬಹುದು



© ಧನರಾಜ್ ಎಂ.

ಜೂನ್ 5 ವಿಶ್ವ ಪರಿಸರ ದಿನ.

ಸ್ವರ್ಗವೇ ಭೂಮಿಯೊಳಿರದಿರೆ ನೀ ಬೇರೆಲ್ಲಿಯೂ ಇಲ್ಲ ಇಲ್ಲ!. ನಮ್ಮ ಭೂಮಿ ಇಷ್ಟು ಸುಂದರವಾಗಿರಲು ಕಾರಣ, ಇಲ್ಲಿನ ಪರಿಸರ.

"ಈ ಆಗಸ, ಈ ತಾರೆ…

ಜುಳುಜುಳುನೆ ಹರಿವ ಜಲಧಾರೆ, ಮುಗಿಲ ಮಲೆಯ ಸಾಲೆ,

ಆಹಾ! ಯಾರದು ಈ ಬಗೆ ಲೀಲೆ?"

ಎಂಬ ಕವಿ ನುಡಿಯಂತೆ ಕಾಡು, ನದಿ, ಸಮುದ್ರ , ಬೆಟ್ಟಗುಡ್ಡ, ಕಣಿವೆ, ಮಂಜು ಜೀವವೈವಿಧ್ಯ ಎಲ್ಲವೂ ಈ ಭೂರಮೆಯ ಸೌಂದರ್ಯ ಹೆಚ್ಚಿಸುವ ಆಭರಣಗಳು. ಜೈವಿಕ ಮತ್ತು ಅಜೈವಿಕ ವಸ್ತುಗಳ ಸಂಯೋಜನೆಯೊಂದಿಗೆ, ಪಂಚಭೂತಗಳಾದ ಗಾಳಿ, ನೀರು, ಬೆಂಕಿ, ಮಣ್ಣು ಮತ್ತು ಆಕಾಶ ಕೂಡಿರುವ ಈ ಭೂಮಿ ಅನೇಕ ಕಾರಣಗಳಿಂದ ತನ್ನ ನೈಜರೂಪವನ್ನು, ಜೀವವೈವಿಧ್ಯತೆಯ ಶ್ರೀಮಂತಿಕೆಯನ್ನು ದಿನೇದಿನೇ ಕಳೆದುಕೊಳ್ಳುತ್ತಿದೆ. ವಾಯುಮಾಲಿನ್ಯ, ಜಲಮಾಲಿನ್ಯ, ಶಬ್ದಮಾಲಿನ್ಯ, ಮಣ್ಣಿನ ಮಾಲಿನ್ಯಗಳಿಂದ ನಮ್ಮ ಸುತ್ತಲಿನ ಪರಿಸರ ಮತ್ತು ಪರಿಸರ ವ್ಯವಸ್ಥೆಯನ್ನು ಕಾಪಾಡಿಕೊಳ್ಳುವುದು ಅನಿವಾರ್ಯವಾಗಿದೆ.

ಅತಿಯಾಗುತ್ತಿರುವ ಅರಣ್ಯನಾಶ, ಪ್ಲಾಸ್ಟಿಕ್ ಬಳಕೆ, ನಗರೀಕರಣ, ರಸ್ತೆ ಕಾರ್ಖಾನೆಗಳ ನಿರ್ಮಾಣ, ಇವೆಲ್ಲವೂ ಪರಿಸರ ಹಾನಿಗೆ ತಮ್ಮದೇ ರೀತಿಯಲ್ಲಿ ಕೊಡುಗೆ ನೀಡುತ್ತಿವೆ. ಭೂಮಿಗೆ ರಕ್ಷಣಾ ಕವಚದಂತಿರುವ ಓಝೋನ್ ಪದರವು ಹಸಿರುಮನೆ ಪರಿಣಾಮಕ್ಕೆ ಕಾರಣವಾದ ಅನಿಲಗಳಿಂದ ರಂಧ್ರವಾಗುತ್ತಿದೆ. ಈ ಎಲ್ಲ ಅಂಶಗಳನ್ನು ಗಮನಿಸಿ ಮುಂಬರುವ ಅಪಾಯವನ್ನು ತಪ್ಪಿಸುವಂತೆ ಜನರಲ್ಲಿ ಪರಿಸರದ ಬಗೆಗಿನ ಜಾಗೃತಿಯನ್ನು ಮೂಡಿಸಲು ಪ್ರತಿ ವರ್ಷ ಜೂನ್ 5ರಂದು ವಿಶ್ವ ಪರಿಸರ ದಿನವನ್ನು ಆಚರಿಸಲಾಗುತ್ತದೆ.

ಹಾಗಾಗಿ ನೀವು ಬರೆದ ಪರಿಸರ ಲೇಖನಗಳು ಹಾಗೂ ಕವನಗಳನ್ನ ನಮ್ಮ ಈ ಇ-ಮಾಸಿಕಕ್ಕೆ ಜೂನ್ 15ರ ಒಳಗಾಗಿ ಈ ಕೆಳಗಿನ ವಿಳಾಸಕ್ಕೆ ಅಥವಾ ನಮ್ಮ ಇ ಮೇಲ್ ವಿಳಾಸಕ್ಕೆ ಕಳುಹಿಸಿಕೊಡಿ.

kaanana.mag@gmail.com
ಅಥವಾ Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.